ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಕೋವಿಡ್-19 ರೋಗವನ್ನು ನಿಯಂತ್ರಣಗೊಳಿಸುವ ಮತ್ತು ಟೆಸ್ಟಿಂಗ್ ವರದಿ ವಿಳಂಬತೆ ತಡೆಹಿಡಿಯಲು ಕೈಗೊಂಡ ಕ್ರಮಗಳ ಕುರಿತು

ಶ್ರೀ ಅಲ್ಲಂ ವೀರಭದ್ರಪ್ಪ(ವಿಧಾನಸಭೆಯಿಂದ ಚುನಾಯಿತರಾದವರು) -

05 (66) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೋವಿಡ್-19 ರೋಗವನ್ನು ನಿಯಂತ್ರಣಗೊಳಿಸಲು ಸರ್ಕಾರ ಯಾವ ರೀತಿಯ ಕ್ರಮ ಅನುಸರಿಸಿದೆ;

(ಆ) ಕೋವಿಡ್-19 ರೋಗಕ್ಕೆ ಟೆಸ್ಟ್ ಮಾಡಿದ ರೋಗಿಯ ರಿಪೋರ್ಟ್ ನಿರೀಕ್ಷೆ ಮಾಡುವುದಕ್ಕೆ ಗರಿಷ್ಠ 10-12 ದಿನ ಆಗುತ್ತಿರುವುದು ನಿಜವೇ; ಈ ಅವಧಿಯಲ್ಲಿ ರೋಗಿಯು ಸೆಲ್ಫ್ ಕ್ವಾರಂಟೇನ್ ಆಗದೆ ಸುತ್ತಾಡುವುದನ್ನು ತಡೆಹಿಡಿಯುವುದಕ್ಕೆ ಸರ್ಕಾರ ತೆಗೆದುಕೊಂಡ ಕ್ರಮವೇನು; ಈ ರೋಗಕ್ಕೆ ಇಲ್ಲಿಯವರೆಗೆ ಐಟಂವಾರು ಖರ್ಚಾದ ವಿವರಗಳೇನು?